

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 162(188) |
| ಸದಸ್ಯರ ಹೆಸರು | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 03.03.2020 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜಲ್ಲಿ ಕ್ರಷರ್‌ಗಳ ಮಾಲೀಕರಿಂದ ಸರ್ಕಾರಕ್ಕೆ ಕಳೆದ ಎರಡು ವರ್ಷಗಳಿಂದ ಬರಬೇಕಾಗಿರುವ ಬಾಕಿ ರಾಯಧನವೆಷ್ಟು; ಈ ಬಾಕಿ ರಾಯಧನ ವಸೂಲು ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 36ರಂತೆ ಕಲ್ಲುಗಣಿ ಗುತ್ತಿಗೆದಾರರು ಗುತ್ತಿಗೆ ಪ್ರದೇಶದಲ್ಲಿ ತೆಗೆದು ಸಾಗಾಣಿಕೆ ಮಾಡುವ ಉಪಖನಿಜಕ್ಕೆ ರಾಜಧನ ಸಂಗ್ರಹಿಸಲಾಗುತ್ತದೆ.<br>ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ನಿಯಮ, 2012ರ ನಿಯಮ 3-B ರಂತೆ ಕಲ್ಲುಪುಡಿ ಘಟಕಗಳು ಇಲಾಖೆಯ Integrated Lease Management System ತಂತ್ರಾಂಶದಲ್ಲಿ ನೋಂದಣಿ ಮಾಡಿಸಬೇಕಾಗಿರುತ್ತದೆ. ನಂತರ ಪರವಾನಿಗೆ ಹೊಂದಿದ ಕಲ್ಲುಗಣಿ ಗುತ್ತಿಗೆದಾರರಿಂದ ರಾಜಧನ ಪಾವತಿಯಾಗಿರುವ ಕಚ್ಚಾ ಕಟ್ಟಡ ಖನಿಜ ರವಾನೆ ಪರವಾನಗಿಯನ್ನು ಪಡೆದು ಕ್ರಷರ್ ಘಟಕದಲ್ಲಿ ಅಂತಿಮ ಉತ್ಪನ್ನವನ್ನು ಉತ್ಪಾದಿಸಿದ ನಂತರ ಸೆಕೆಂಡರಿ ಪರವಾನಿಗೆಯೊಂದಿಗೆ ಸದರಿ ಉತ್ಪನ್ನವನ್ನು ಸಾಗಾಣಿಕೆ ಮಾಡಬಹುದಾಗಿರುತ್ತದೆ. ಜಲ್ಲಿ ಕ್ರಷರ್ ಮಾಲೀಕರಿಂದ ರಾಜಧನ ಸಂಗ್ರಹಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ.<br>ಕಳೆದ ಎರಡು ವರ್ಷಗಳಲ್ಲಿ ಕಲ್ಲುಗಣಿ ಗುತ್ತಿಗೆದಾರರು ಪಾವತಿಸಬೇಕಾದ ಬಾಕಿ ರಾಜಧನದ ವಿವರ ಕೆಳಕಂಡಂತಿದೆ:<br>ಕ್ರ..ಸಂ. / ವರ್ಷ / ಬಾಕಿ ರಾಜಧನ (ಲಕ್ಷಗಳಲ್ಲಿ)<br>1 / 2017–18 / 118514.42<br>2 / 2018–19 / 150342.49 |
| ಆ) | ಮುಟ್ಟುಗೋಲು ಹಾಕಿದ ಜಲ್ಲಿಕಲ್ಲು ಮತ್ತು ಇತರ ಖನಿಜಗಳ ಮೊತ್ತವೆಷ್ಟು; ಪ್ರಸ್ತುತ ಈ ಮುಟ್ಟುಗೋಲು ಹಾಕಿದ ಜಲ್ಲಿಕಲ್ಲುಗಳನ್ನು ಯಾವ ರೀತಿ ವಿಲೇ ಮಾಡಲಾಗಿದೆ; ಇವುಗಳ ಮಾರಾಟದಿಂದ ಬಾಕಿ ಇರುವ ರಾಯಧನವನ್ನು ವಸೂಲು ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದ; | ಜಲ್ಲಿ ಕ್ರಷರ್ ಘಟಕಗಳಿಂದ ಯಾವುದೇ ಉಪಖನಿಜವನ್ನು ಮುಟ್ಟುಗೋಲು ಹಾಕಿಕೊಂಡಿರುವುದಿಲ್ಲ. |

| | | |
|---|---|---|
| ಇ) | ಯಾವ ಯಾವ ಕ್ರಷರ್‌ನಲ್ಲಿ ಎಷ್ಟೆಷ್ಟು ಜಲ್ಲಿಕಲ್ಲುಗಳ ದಾಸ್ತಾನಿದೆ; ಕ್ರಷರ್ ಘಟಕಗಳ ಸ್ಥಿತಿಗತಿ ಬಗ್ಗೆ ಡ್ರೋಣ್ ಸರ್ವೆ ನಡೆಸಲಾಗಿದೆಯೇ; ಇಲ್ಲವಾದಲ್ಲಿ ಯಾವಾಗ ನಡೆಸಲಾಗುವುದು? | 2018–19ನೇ ಸಾಲಿನಲ್ಲಿ ರಾಜ್ಯದಲ್ಲಿ ಮಂಜೂರು ಮಾಡಲಾಗಿದ್ದ ಕಲ್ಲುಗಣಿ ಗುತ್ತಿಗೆ ಪ್ರದೇಶಗಳನ್ನು ಡ್ರೋಣ್ ಸರ್ವೆ ಕಾರ್ಯ ನಡೆಸಲಾಗಿರುತ್ತದೆ. ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ಉಪಖನಿಜವನ್ನು ಉತ್ಪಾದಿಸಿ ಖನಿಜ ರವಾನೆ ಪರವಾನಗಿ ಪಡೆಯದೆ ನಿಯಮ ಉಲ್ಲಂಘಿಸಿ ಸಾಗಾಣಿಕೆ ಮಾಡಿರುವ ಪ್ರಮಾಣಕ್ಕೆ ರಾಜಧನದ 05 ಪಟ್ಟು ದಂಡವನ್ನು ವಿಧಿಸಿ ಪಾವತಿಸುವಂತೆ, ಗುತ್ತಿಗೆದಾರರಿಗೆ ನೋಟೀಸ್ ಜಾರಿ ಮಾಡಲಾಗಿರುತ್ತದೆ.<br><br>ಇಲಾಖೆಯಿಂದ ದಂಡ ಪಾವತಿಸುವಂತೆ ನೀಡಿರುವ ನೋಟೀಸ್‌ಗಳನ್ನು ಪ್ರಶ್ನಿಸಿ ಕೆಲವು ಗುತ್ತಿಗೆದಾರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ದಾಖಲಿಸಿರುತ್ತಾರೆ.<br><br>ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 13252/2019ರ ಆದೇಶ ದಿನಾಂಕ 28.11.2019 ಮತ್ತು 29870/2019ರ ಆದೇಶ ದಿನಾಂಕ 03.12.2019 ರಲ್ಲಿ ಇಲಾಖೆಯಿಂದ ಬಾಕಿ ಪಾವತಿಸುವಂತೆ ನೀಡಲಾಗಿದ್ದ ನೋಟೀಸ್‌ಗಳನ್ನು ವಜಾಗೊಳಿಸಿದ್ದು, ಗುತ್ತಿಗೆದಾರರಿಗೆ ವೈಯಕ್ತಿಕ ವಿಚಾರಣೆ ನಡೆಸಿ ಹೇಳಿಕೆಯನ್ನು ಪಡೆದ ನಂತರ ದಂಡ ಪಾವತಿ ಕುರಿತು ಆದೇಶ ಜಾರಿ ಮಾಡಲು ನಿರ್ದೇಶನ ನೀಡಲಾಗಿರುತ್ತದೆ.<br><br>ಮಾನ್ಯ ಉಚ್ಚ ನ್ಯಾಯಾಲಯದ ವಿವಿಧ ರಿಟ್ ಅರ್ಜಿ ಪ್ರಕರಣಗಳಲ್ಲಿನ ಆದೇಶದನ್ವಯ ಗುತ್ತಿಗೆದಾರರ ಸಮ್ಮುಖದಲ್ಲಿ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್ ಸರ್ವೆ ಕಾರ್ಯ ಕೈಗೊಂಡು ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ಉಪ ಖನಿಜವನ್ನು ಉತ್ಪಾದಿಸಿ ಖನಿಜ ರವಾನೆ ಪರವಾನಗಿ ಪಡೆಯದೆ ನಿಯಮ ಉಲ್ಲಂಘಿಸಿ ಖನಿಜ ಸಾಗಾಣಿಕೆ ಮಾಡಿದ್ದಲ್ಲಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುತ್ತಿದೆ. |

ಸಂಖ್ಯೆ: ಸಿಐ 82 ಎಂಎಂಎನ್ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು